

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 279 (2088)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಕಂದಾಯ ಸಚಿವರು

ವಿಷಯ : ವೈಯಾಲಿಕಾವಲ್ ಗೃಹನಿರ್ಮಾಣ ಸಹಕಾರಿ ಸಂಘದ ಪರವಾಗಿ ಭೂ ಸ್ವಾಧೀನ ಜಮೀನುಗಳ ಬಗ್ಗೆ

(ಅ) ಬೆಂಗಳೂರು ಉತ್ತರ ತಾಲ್ಲೂಕು, ಕಸಬಾ ಹೋಬಳಿ, ನಾಗವಾರ ಗ್ರಾಮದಲ್ಲಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಸರ್ಕಾರದಿಂದ ಅಧಿಸೂಚಿತ 176-05 ಎ/ಗುಂ ಜಮೀನುಗಳಲ್ಲಿ 165-30 ಎ/ಗುಂ ಜಮೀನುಗಳನ್ನು ಸುಬರ್ದು ನೀಡಿ ಅದರಲ್ಲಿ 40-39 ಎ/ಗುಂ ಜಮೀನುಗಳನ್ನು ಯಾವ ಕಾರಣಕ್ಕೆ ಭೂಸ್ವಾಧೀನದಿಂದ ಕೈಬಿಡಲಾಗಿದೆ; ಉಳಿದ ಜಮೀನುಗಳನ್ನು ಕೈಬಿಡದೇ ಇರಲು ಕಾರಣವೇನು;

(ಆ) ಮಾನ್ಯ ಸರ್ವೋಚ್ಚ ನ್ಯಾಯಾಲಯದ SLPs (C) Nos. 11550-57 of 1991, Civil Appeal Nos.2086-2087 of 2004, Civil Appeal No. 1930 of 2012ರ ಪ್ರಕರಣಗಳಲ್ಲಿ ಭೂಸ್ವಾಧೀನಕ್ಕೆ ಅಧಿಸೂಚಿತ ಜಮೀನುಗಳನ್ನು ರದ್ದುಪಡಿಸಿ, ಭೂ ಮಾಲೀಕರಿಗೆ ಹಿಂದಿರುಗಿಸುವಂತೆ ನೀಡಿದ ತೀರ್ಪು/ಆದೇಶಗಳಂತೆ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘದ ಪ್ರಕರಣದಲ್ಲೂ ಭೂಸ್ವಾಧೀನಪಡಿಸಿಕೊಂಡ ಎಲ್ಲಾ ಭೂ ಮಾಲೀಕರಿಗೆ ಜಮೀನುಗಳನ್ನು ಹಿಂದಿರುವ ಕ್ರಮವನ್ನು ಸರ್ಕಾರ ಪಾಲಿಸಿದೆಯೇ; ಹೌದಾದಲ್ಲಿ, ವಿವರ ಒದಗಿಸುವುದು; ಇಲ್ಲದಿದ್ದಲ್ಲಿ, ಕಾರಣವೇನು?